# ಕರ್ನಾಟಕ ವಿಧಾನ ಪರಿಷತ್

| | | |
|---|---|---|
| 1 | ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ | 839 |
| 2 | ಸದಸ್ಯರ ಹೆಸರು | ಡಾ|| ವೈ.ಎ.ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ) |
| 3 | ವಿಷಯ | ರೇಷ್ಮೆ ಗೂಡಿಗೆ ನೀಡುತ್ತಿರುವ ಪ್ರೋತ್ಸಾಹ ಧನದ ಬಗ್ಗೆ. |
| 4 | ಉತ್ತರಿಸುವ ದಿನಾಂಕ | 15-12-2020 |
| 5 | ಉತ್ತರಿಸುವವರು | ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು |

| | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ರೇಷ್ಮೆ ಗೂಡಿಗೆ ಸರ್ಕಾರ ನೀಡುತ್ತಿರುವ ಪ್ರೋತ್ಸಾಹ ಧನ ಎಷ್ಟು: | ಕೋವಿಡ್-19 ಸಂಕ್ರಮಣ ಪರಿಸ್ಥಿತಿಯಲ್ಲಿ ರೇಷ್ಮೆಗೂಡಿನ ಧಾರಣೆಗಳು ಗಣನೀಯವಾಗಿ ಕುಸಿದಿರುವ ಹಿನ್ನಲೆಯಲ್ಲಿ 2020-21ನೇ ಸಾಲಿನಲ್ಲಿ ರೈತರ ಅನುಕೂಲಕ್ಕಾಗಿ ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆಗಳಲ್ಲಿ ವಹಿವಾಟು ಮಾಡಿದ ಪ್ರತಿ ಕೆ.ಜಿ. ಮಿಶ್ರತಳಿ ಗೂಡಿಗೆ ರೂ.30/- ರಂತೆ ಹಾಗೂ ದ್ವಿತಳಿ ಸಂಕರಣ ಗೂಡಿಗೆ ರೂ.50/-ರಂತೆ ರೇಷ್ಮೆ ಬೆಳೆಗಾರರಿಗೆ ಪ್ರೋತ್ಸಾಹಧನ ನೀಡಲಾಗುತ್ತಿದೆ. |
| ಆ | ಇದುವರೆವಿಗೂ ಸರ್ಕಾರ ನೀಡಿರುವ ಪ್ರೋತ್ಸಾಹಧನ ಎಷ್ಟು; (ಜಿಲ್ಲಾವಾರು ವಿವರ ನೀಡುವುದು) | ಇದುವರೆಗೂ ಗೂಡಿಗೆ ಪ್ರೋತ್ಸಾಹಧನ ನೀಡಲು ರೂ.30.00 ಕೋಟಿಗಳ ಅನುದಾನವನ್ನು ಬಿಡುಗಡೆ ಮಾಡಿದ್ದು, ರೇಷ್ಮೆ ಬೆಳೆಗಾರರಿಗೆ ಮಾರುಕಟ್ಟೆಗಳ ಮುಖಾಂತರ ನೇರವಾಗಿ ಜಮೆಯಾಗುತ್ತಿದೆ. ದಿನಾಂಕ:9/12/2020ರ ವರೆಗೆ ರೂ.2355.51 ಲಕ್ಷಗಳ ಪ್ರೋತ್ಸಾಹಧನವನ್ನು ನೀಡಲಾಗಿದೆ. ಜಿಲ್ಲಾವಾರು ವಿವರಗಳನ್ನು ಅನುಬಂಧದಲ್ಲಿ ನಮೂದಿಸಿದೆ. |
| ಇ | ರೇಷ್ಮೆ ಬೆಳೆ ವಿಸ್ತರಣೆಗೆ ಸರ್ಕಾರ ನೀಡುತ್ತಿರುವ ಪ್ರೋತ್ಸಾಹ ದಾಯಕ ಯೋಜನೆಗಳು ಯಾವುವು? | ರಾಜ್ಯದಲ್ಲಿ ರೇಷ್ಮೆ ಬೆಳೆ ವಿಸ್ತರಣೆಗಾಗಿ ರೇಷ್ಮೆ ಬೆಳೆಗಾರರ ನೆರವಿಗೆ ರೇಷ್ಮೆ ಇಲಾಖೆಯು ಈ ಕೆಳಕಂಡ ಕಾರ್ಯಕ್ರಮಗಳನ್ನು ರೂಪಿಸಿ ಸಹಾಯಧನ ಹಾಗೂ ಪ್ರೋತ್ಸಾಹಧನ ಸೌಲಭ್ಯಗಳನ್ನು ನೀಡಲಾಗುತ್ತಿದೆ.<br>1. ಸುಧಾರಿತ ಹಿಪ್ಪುನೇರಳೆ ತೋಟ ಬೆಳೆಯಲು, ನರ್ಸರಿ ಬೆಳೆಸಲು ಸಹಾಯಧನ ಹಾಗೂ ತಾಂತ್ರಿಕ ಮಾಹಿತಿ ಒದಗಿಸಲಾಗುತ್ತಿದೆ.<br>2. ಹಿಪ್ಪುನೇರಳೆ ತೋಟಕ್ಕೆ ಟ್ರಂಚಿಂಗ್ – ಮಲ್ಚಿಂಗ್ ಮಾಡಲು ಸಹಾಯಧನ ಹಾಗೂ ತಾಂತ್ರಿಕ ಮಾಹಿತಿ.<br>3. ಹಿಪ್ಪುನೇರಳೆ ತೋಟಕ್ಕೆ ಹನಿ ನೀರಾವರಿ ಅಳವಡಿಕೆಗೆ ಶೇ.90ರಷ್ಟು ಸಹಾಯಧನ.<br>4. ಹಿಪ್ಪುನೇರಳೆ ತೋಟದ ಮಣ್ಣಿನ ಫಲವತ್ತತೆಗಾಗಿ ಜೈವಿಕಗೊಬ್ಬರ ಬಳಕೆ, ಹಿಪ್ಪುನೇರಳೆ ಸೊಪ್ಪಿನ ಇಳುವರಿ ಹಾಗೂ ಗುಣಮಟ್ಟ ಹೆಚ್ಚಿಸುವ ಸಲುವಾಗಿ ಸಸ್ಯ ಸಂವರ್ಧಕ ಹಾಗೂ ಬೇರು ಕೊಳೆ ನಿಯಂತ್ರಣಕ್ಕಾಗಿ ಸಹಾಯಧನ.<br>5. ಹಿಪ್ಪುನೇರಳೆ ಮರ ಕೃಷಿ ಪದ್ಧತಿ ಉತ್ತೇಜನಕ್ಕಾಗಿ ಸಹಾಯಧನ.<br>6. ರೇಷ್ಮೆ ಹುಳು ಸಾಕಾಣಿಕೆ ಮನೆ/ಮೌಂಟಿಂಗ್ ಹಾಲ್ ನಿರ್ಮಾಣಕ್ಕೆ ಸಹಾಯಧನ. |

| | | |
|---|---|---|
| | | 7. ಸೋಂಕು ನಿವಾರಕಗಳ ಪೂರೈಕೆ ಮತ್ತು ಸಲಕರಣೆಗಳಿಗೆ ಸಹಾಯಧನ ಹಾಗೂ ತಾಂತ್ರಿಕ ಮಾಹಿತಿ.<br>8. ರೋಟರಿ ಚಂದ್ರಿಕೆಗಳ ಖರೀದಿಗೆ ಸಹಾಯಧನ<br>9. ದ್ವಿತಳಿ ಚಾಕಿ ವೆಚ್ಚಕ್ಕೆ ಸಹಾಯಧನ.<br>10. ಚಾಕಿ ಸಾಕಾಣಿಕಾ ಕೇಂದ್ರದ ಸ್ಥಾಪನೆಗೆ / ಸಲಕರಣೆಗಳಿಗೆ ಖರೀದಿಗೆ ಸಹಾಯಧನ.<br>11. ನೂತನ ತಾಂತ್ರಿಕತೆಗಳ ಅಳವಡಿಕೆಗೆ ರೈತರಿಗೆ ತರಬೇತಿ ಮತ್ತು ಕಾರ್ಯಾಗಾರ.<br>12. ರೇಷ್ಮೆ ಗೂಡಿನ ಧಾರಣೆ ಕುಸಿತ ಸಂದರ್ಭದಲ್ಲಿ ರೇಷ್ಮೆ ಬೆಳೆಗಾರರಿಗೆ ರಕ್ಷಣಾತ್ಮಕ ದರ ನೀಡಲಾಗುತ್ತಿದೆ.<br>13. ದ್ವಿತಳಿ ಬಿತ್ತನೆ ಬೆಳೆಗಾರರು ಹಾಗೂ ಮೈಸೂರು ಬಿತ್ತನೆ ಬೆಳೆಗಾರರು ಬೆಳೆಯುವ ಬಿತ್ತನೆ ಗೂಡಿಗೆ ಪ್ರೋತ್ಸಾಹಧನ / ಬೋನಸ್ ನೀಡಲಾಗುತ್ತಿದೆ.<br>14. ರೇಷ್ಮೆ ಬಿತ್ತನೆ ಬೆಳೆಗಾರರಿಗೆ ಉತ್ಪಾದಕತೆ ಮತ್ತು ಗುಣಮಟ್ಟ ಆಧರಿಸಿ ಬಿತ್ತನೆ ಗೂಡಿಗೆ ಪ್ರೋತ್ಸಾಹಧನ ನೀಡಲಾಗುತ್ತಿದೆ.<br>15. ಉತ್ತರ ಕರ್ನಾಟಕ ಜಿಲ್ಲೆಗಳಲ್ಲಿ ಉತ್ಪಾದಿಸುವ ದ್ವಿತಳಿ ರೇಷ್ಮೆ ಗೂಡಿಗೆ ಕೆ.ಜಿ.ಗೆ ರೂ.10/-ರಂತೆ ಸಾಗಾಣಿಕೆ ವೆಚ್ಚ ನೀಡಲಾಗುತ್ತಿದೆ.<br><br>ಮುಂದುವರೆದು, ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತ್ರಿ ಯೋಜನೆಯಡಿ ಹಿಪ್ಪುನೇರಳೆ ನರ್ಸರಿ / ತೋಟ ಸ್ಥಾಪನೆ, ತೋಟ ನಿರ್ವಹಣೆ ಮತ್ತು ಹಿಪ್ಪುನೇರಳೆ ಮರ ಕೃಷಿ ಪದ್ಧತಿ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗಿದ್ದು, ರೈತರಿಗೆ ಕೂಲಿ/ಸಾಮಗ್ರಿ ವೆಚ್ಚವನ್ನು ಭರಿಸುವ ಮೂಲಕ ಗ್ರಾಮೀಣ ಪ್ರದೇಶದಲ್ಲಿ ಉದ್ಯೋಗವಕಾಶವನ್ನು ಕಲ್ಪಿಸಿ ಆರ್ಥಿಕ ಸದೃಢತೆಯನ್ನು ಒದಗಿಸಲಾಗುತ್ತಿದೆ. |

ರೇಷ್ಮೆ 187 ರೇಕೃಪಿ 2020

(ನಾರಾಯಣಗೌಡ)
ಪೌರಾಡಳಿತ, ತೋಟಗಾರಿಕೆ ಮತ್ತು ರೇಷ್ಮೆ
ಸಚಿವರು

ಅನುಬಂಧ

ದಿನಾಂಕ:09/12/2020ರವರೆಗೆ ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆಗಳಲ್ಲಿ ವಿತರಣೆ ಮಾಡಿದ ಪ್ರೋತ್ಸಾಹಧನದ ವಿವರಗಳು (ರೂ.ಲಕ್ಷಗಳಲ್ಲಿ)

| ಕ್ರ ನಂ | ಮಾರುಕಟ್ಟೆ | ಜಿಲ್ಲೆ | ಮಾರುಕಟ್ಟೆಗಳಿಗೆ ಬಿಡುಗಡೆಯಾದ ವಂಟನೆ | ಭರಿಸಿದ ವೆಚ್ಚ | | | ಫಲಾನುಭವಿಗಳ ಸಂಖ್ಯೆ | | |
|---|---|---|---|---|---|---|---|---|---|
| | | | | ದ್ವಿತಳಿ ಗೂಡು | ಮಿಶ್ರತಳಿ ಗೂಡು | ಒಟ್ಟು | ದ್ವಿತಳಿ ಗೂಡು | ಮಿಶ್ರತಳಿ ಗೂಡು | ಒಟ್ಟು |
| 1 | ರಾಮನಗರ | ರಾಮನಗರ | 795.00 | 513.16 | 280.84 | 794.00 | 4550 | 4964 | 9514 |
| 2 | ಕನಕಪುರ | | 340.10 | 0.57 | 219.40 | 219.97 | 27 | 6131 | 6158 |
| 3 | ಚನ್ನಪಟ್ಟಣ | | 50.00 | | 34.77 | 34.77 | | 3329 | 3329 |
| 4 | ಶಿಡ್ಲಘಟ್ಟ | ಚಿಕ್ಕಬಳ್ಳಾಪುರ | 580.00 | 5.38 | 384.40 | 389.78 | 47 | 5029 | 5076 |
| 5 | ಚಿಂತಾಮಣಿ | | 60.00 | | 38.10 | 38.10 | | 742 | 742 |
| 6 | ಚಿಕ್ಕಬಳ್ಳಾಪುರ | | 18.00 | 1.96 | 16.03 | 17.99 | 15 | 352 | 367 |
| 7 | ಹೆಚ್.ಕ್ರಾಸ್ | | 33.00 | | 33.00 | 33.00 | | 677 | 677 |
| 8 | ಕೋಲಾರ | ಕೋಲಾರ | 205.00 | 133.47 | 46.97 | 180.44 | 1319 | 932 | 2251 |
| 9 | ಕ್ಯಾಲನೂರು | | 70.00 | | 65.87 | 65.87 | | 982 | 982 |
| 10 | ಶ್ರೀನಿವಾಸಪುರ | | 36.00 | | 22.33 | 22.33 | | 466 | 466 |
| 11 | ವಿಜಯಪುರ | ಬೆಂಗಳೂರು ಗ್ರಾಮಾಂತರ | 120.00 | | 76.19 | 76.19 | | 1446 | 1446 |
| 12 | ಕೊಳ್ಳೇಗಾಲ | ಚಾಮರಾಜನಗರ | 400.00 | 0.22 | 248.22 | 248.44 | 7 | 4564 | 4571 |
| 13 | ಸಂತೆಮರಹಳ್ಳಿ | | 28.00 | 0.40 | 26.20 | 26.59 | 6 | 571 | 577 |
| 14 | ಮಳವಳ್ಳಿ | ಮಂಡ್ಯ | 60.00 | | 44.27 | 44.27 | | 1902 | 1902 |
| 15 | ಮೈಸೂರು | ಮೈಸೂರು | 22.00 | 21.80 | 0.20 | 22.00 | 379 | 8 | 387 |
| 16 | ಶಿರಹಟ್ಟಿ | ಗದಗ | 50.00 | 35.12 | | 35.12 | 631 | | 631 |
| 17 | ಹಾವೇರಿ | ಹಾವೇರಿ | 56.00 | 34.47 | | 34.47 | 650 | | 650 |
| 18 | ಅಥಣಿ | ಬೆಳಗಾವಿ | 12.00 | 9.77 | 0.09 | 9.86 | 214 | 6 | 108 |
| 19 | ಗೋಕಾಕ್ | | 11.00 | 10.84 | 0.14 | 10.98 | 228 | 10 | 238 |
| 20 | ರಾಯಪುರ | ಧಾರವಾಡ | 14.00 | 11.84 | 0.10 | 11.94 | 229 | 3 | 232 |
| 21 | ಮುಧೋಳ | ಬಾಗಲಕೋಟೆ | 9.00 | 8.85 | 0.15 | 9.00 | 146 | 1 | 147 |
| 22 | ಇಳಕಲ್ | | 0.20 | 0.20 | | 0.20 | 3 | | 3 |
| 23 | ವಿಜಯಪುರ | ವಿಜಯಪುರ | 5.70 | 5.44 | 0.26 | 5.70 | 82 | 4 | 86 |
| 24 | ಕಲಬುರಗಿ | ಕಲಬುರಗಿ | 11.00 | 10.99 | | 10.99 | 170 | | 170 |
| 25 | ಹುಮ್ನಾಬಾದ್ | ಬೀದರ್ | 11.30 | 10.70 | 0.29 | 10.99 | 188 | 9 | 197 |
| 26 | ಹಾಸನ | ಹಾಸನ | 2.70 | 2.54 | | 2.54 | 63 | | 63 |
| | ಒಟ್ಟು | | **3000** | **817.71** | **1537.80** | **2355.51** | **8954** | **32128** | **40970** |